KA / BG-GPO/2515/WPP-47/2009-2011




# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಏಪ್ರಿಲ್ ೨೩, ೨೦೦೯ (ವೈಶಾಖ ೩, ಶಕ ವರ್ಷ ೧೯೩೧) | ಸಂಚಿಕೆ ೧೭ |
|---|---|---|


## ಭಾಗ – ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್.ಆರ್.ಎಫ್(109):(ಪೂ):ಸಿ.ಆರ್.14/08–09, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2009**

**ವಿಷಯ:** ಪೀಪಲ್ಸ್ ಎಜುಕೇಷನ್ ಸೊಸೈಟಿ (ರಿ) ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಹರಳೂರು ಗ್ರಾಮದ ಸ.ನಂ. 45/1 ರಲ್ಲಿ 1–00 ಎಕರೆ 45/2 ರಲ್ಲಿ 1–24 ಎಕರೆ/ಗುಂಟೆ 45/3 ರಲ್ಲಿ 1–22 ಎಕರೆ/ಗುಂಟೆ 45/4 ರಲ್ಲಿ 0–08 ಗುಂಟೆ ಮತ್ತು 46–1 ರಲ್ಲಿ 1–36 ಎಕರೆ/ಗುಂಟೆ ಒಟ್ಟು 6–10 ಎಕರೆ/ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

**ಉಲ್ಲೇಖ:** ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರ ವರದಿ ಪತ್ರ ಸಂಖ್ಯೆ:ಎಲ್ಆರ್ಎಫ್:ಸಿಆರ್: 303/08–09, ದಿನಾಂಕ: 13.3.2009.

ಪೀಪಲ್ಸ್ ಎಜುಕೇಷನ್ ಸೊಸೈಟಿ (ರಿ), 50 ಅಡಿ ರಸ್ತೆ, ಹನುಮಂತನಗರ, ಬನಶಂಕರಿ 1ನೇ ಹಂತ, ಬೆಂಗಳೂರು–50 ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಹರಳೂರು ಗ್ರಾಮದ ಸ.ನಂ. 45/1ರಲ್ಲಿ 1–00 ಎಕರೆ 45/2 ರಲ್ಲಿ 1–24 ಎಕರೆ/ಗುಂಟೆ 45/3 ರಲ್ಲಿ 1–22 ಎಕರೆ/ಗುಂಟೆ 45/4 ರಲ್ಲಿ 0–08 ಗುಂಟೆ ಮತ್ತು 46–1 ರಲ್ಲಿ 1–36 ಎಕರೆ/ಗುಂಟೆ ಒಟ್ಟು 6–10 ಎಕರೆ/ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎ ಮತ್ತು ನಮೂನೆ–15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಪ್ರಸ್ತಾವಿತ ಹರಳೂರು ಗ್ರಾಮದ ಸ.ನಂ. 45/1 ರಲ್ಲಿ 1–00 ಎಕರೆ 45/2 ರಲ್ಲಿ 1–24 ಎಕರೆ/ಗುಂಟೆ 45/3 ರಲ್ಲಿ 1–22 ಎಕರೆ/ಗುಂಟೆ 45/4 ರಲ್ಲಿ 0–08 ಗುಂಟೆ ಮತ್ತು 46–1 ರಲ್ಲಿ 1–36 ಎಕರೆ/ಗುಂಟೆ ಒಟ್ಟು 6–10 ಎಕರೆ/ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(ii) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ನೋಂದಣಿ ಸಂಖ್ಯೆ: ಎಸ್.ನಂ.211/72–73 ದಿನಾಂಕ: 11.10.1972 ರಲ್ಲಿ ಮೈಸೂರಿನಲ್ಲಿ ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಹಾಗೂ ಇನಾಂ ರದ್ದಿಯಾತಿ ಭೂ ಮಂಜೂರಾತಿ ನಿಯಮಗಳಿಗೆ ಒಳಪಟ್ಟಿದ್ದು ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ಪ್ರಸ್ತಾವಿತ ಜಮೀನು ಮಾರಾಟ ಮಾಡಲು ಐಎನ್‌ಎ:ಸಿಆರ್:4/96–97, ದಿನಾಂಕ:4.10.1996 ಹಾಗೂ ಐಎನ್‌ಎ:ಸಿಆರ್:6/95–96, ದಿನಾಂಕ: 4.10.1996 ರಂತೆ ಅನುಮತಿ ಪಡೆದಿರುತ್ತಾರೆ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109 (1) (ii) ಪ್ರಕಾರ ಶೈಕ್ಷಣಿಕ ಸಂಸ್ಥೆಗಳಿಗೆ 2 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1) (ii) ಪ್ರಕಾರ ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಹರಳೂರು ಗ್ರಾಮದ ಸ.ನಂ. 45/1 ರಲ್ಲಿ 1–00 ಎಕರೆ 45/2 ರಲ್ಲಿ 1–24 ಎಕರೆ/ಗುಂಟೆ 45/3 ರಲ್ಲಿ 1–22 ಎಕರೆ/ಗುಂಟೆ 45/4 ರಲ್ಲಿ 0–08 ಗುಂಟೆ ಮತ್ತು 46–1 ರಲ್ಲಿ 1–36 ಎಕರೆ/ಗುಂಟೆ ಒಟ್ಟು 6–10 ಎಕರೆ/ಗುಂಟೆ ಜಮೀನನ್ನು ಪೀಪಲ್ಸ್ ಎಜುಕೇಷನ್ ಸೊಸೈಟಿ (ರಿ), 50 ಅಡಿ ರಸ್ತೆ, ಹನುಮಂತನಗರ, ಬನಶಂಕರಿ 1ನೇ ಹಂತ, ಬೆಂಗಳೂರು–50 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961 ರ ಕಲಂ 109 (1) (ii) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ:ವ್ಯಶಾಇ.47/ಶಾಸನ/2001: ಬೆಂಗಳೂರು, ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಜಮೀನನ್ನು ಉಪಯೋಗಿಸಿಕೊಳ್ಳತಕ್ಕದ್ದು.
6. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
7. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿಸಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 157

**ಕಂದಾಯ ಸಚಿವಾಲಯ**

**ಭೂಸ್ವಾಧೀನ ಅಧಿನಿಯಮದ 6(1)ನೇ ಪ್ರಕರಣದ ಮೇರೆಗೆ ಘೋಷಣೆ**

**ಕ್ರಮಾಂಕ: ಕಂಇ 69 ಭೂಸ್ವಾತು 2008, ದಿನಾಂಕ: 12ನೇ ಜನವರಿ 2009**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಹೇಮಾವತಿ ನಾಲೆಗಾಗಿ ಅಗತ್ಯವಾಗಿದ್ದವು ಎಂದು ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿಯವರು ಭೂಸ್ವಾಧೀನ ಕಾಯ್ದೆ 1894 ರ ಕಲಂ 4(1) ರ ಮೇರೆಗೆ ಅಧಿಸೂಚನೆ ಕ್ರಮಾಂಕ: ಎಲ್ಎಕ್ಯೂ ಎಸ್ಆರ್/24/07–08, ದಿನಾಂಕ: 7.7.2005ರ ಅಧಿಸೂಚನೆಯಲ್ಲಿ ಅಧಿಸೂಚಿಸಲಾಗಿದ್ದುದರಿಂದ,

ಮತ್ತು ಕರ್ನಾಟಕ ಕಾಯ್ದೆ 33/1991 ರನ್ವಯ ತಿದ್ದುಪಡಿಯಾದ ಭೂ ಆರ್ಜನೆ ಅಧಿನಿಯಮ 1894 ರ (ಕೇಂದ್ರ ಅಧಿನಿಯಮ 1894) (1) 5ಎ ಪ್ರಕರಣದ (2)ನೇ ಉಪಪ್ರಕರಣದ ಮತ್ತು 6(1ಎ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರು ನೀಡಿರುವ ವರದಿಯನ್ನು ಪರಿಶೀಲಿಸಿದ ನಂತರ ಮೇಲೆ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಸದರಿ ಭೂಮಿಗಳನ್ನು ಆರ್ಜನೆ ಮಾಡಿಕೊಳ್ಳುವ ಅಗತ್ಯವಿದೆ ಎಂದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ

ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಭೂಮಿಗಳು ಅಗತ್ಯವಾಗಿವೆ ಎಂದು ಸದರಿ ಅಧಿನಿಯಮ 6(1)ನೇ ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಲಾಗಿದೆ.

ವಿಶೇಷ ಭೂಸ್ವಾಧೀನಾಧಿಕಾರಿಗಳು, ಹೇಮಾವತಿ ನಾಲಾ ವಲಯ, ತುಮಕೂರು ಇವರನ್ನು ಸದರಿ ಭೂಮಿಗಳಿಗೆ ಸಂಬಂಧಿಸಿದಂತೆ ಇನ್ನು ಮುಂದೆ ಕೈಗೊಳ್ಳುವ ಎಲ್ಲಾ ವ್ಯವಹಾರಗಳ ಕುರಿತಂತೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಸದರಿ ಭೂ ಆರ್ಜನೆ ಅಧಿನಿಯಮದ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಈ ಮೂಲಕ ನೇಮಕ ಮಾಡಲಾಗಿದೆ ಹಾಗೂ ಸದರಿ ಭೂಮಿಯ ಆರ್ಜನೆಗೆ ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳಲು ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ.

ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ವಿಶೇಷ ಭೂಸ್ವಾಧೀನಾಧಿಕಾರಿಗಳು, ಹೇಮಾವತಿ ನಾಲಾ ವಲಯ, ತುಮಕೂರು ಇವರ ಕಛೇರಿಯಲ್ಲಿ ಇಡಲಾಗಿದೆ.

ವಿಶೇಷ ಭೂಸ್ವಾಧೀನಾಧಿಕಾರಿಗಳು, ಹೇಮಾವತಿ ನಾಲಾ ವಲಯ, ತುಮಕೂರು ಇವರ ಕಛೇರಿಯಲ್ಲಿ ಭೂಮಿಗಳ ಸ್ಥೂಲ ನಕ್ಷೆಯನ್ನು ಪರಿಶೀಲನೆಗೆ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ತುಮಕೂರು **ತಾಲ್ಲೂಕು:** ತುರುವೇಕೆರೆ **ಹೋಬಳಿ:** ಕಸಬಾ **ಗ್ರಾಮ:** ತಾಳಕೆರೆ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನದ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ವಿಸ್ತೀರ್ಣ ಎ–ಗುಂ | ಆಕಾರ ರೂ.ಪೈ |
| 1. | ಓಂಕಾರಮೂರ್ತಿ ಬಿನ್ ಮಹದೇವಯ್ಯ | ಓಂಕಾರಮೂರ್ತಿ | 25/ ಪಿ18 | ಖುಷ್ಕಿ | 330 | 25 ರ ಉಳಿಕೆ | 25 ರ ಉಳಿಕೆ | ದ್ವಾರನಹಳ್ಳಿ ಗಡಿ | 0–20 | 0–87 |
| 2. | ಸಣ್ಣರಂಗಯ್ಯ ಬಿನ್ ತಿಮ್ಮಯ್ಯ | ಸಣ್ಣರಂಗಯ್ಯ | 25/ಪಿ15ಪಿ1 | ಖುಷ್ಕಿ | 330 | 25 ರ ಉಳಿಕೆ | 25 ರ ಉಳಿಕೆ | ದ್ವಾರನಹಳ್ಳಿ ಗಡಿ | 0–06 | 0–30 |
| 3. | ಅಬ್ದುಲ್ ಸಮ್ಮದ್ ಬಿನ್ ಕರೀಂಸಾಬ್ | ಅಬ್ದುಲ್ ಸಮ್ಮದ್ | 25/2 | ಖುಷ್ಕಿ | 330 | 25 ರ ಉಳಿಕೆ | 25 ರ ಉಳಿಕೆ | ದ್ವಾರನಹಳ್ಳಿ ಗಡಿ | 0–05 | 0–25 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನದ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ವಿಸ್ತೀರ್ಣ ಎ–ಗುಂ | ಆಕಾರ ರೂ.ಪೈ |
| 4. | ಚಿಕ್ಕಮ್ಮ ಕೋಂ ಕೆಂಪಯ್ಯ | ಚಿಕ್ಕಮ್ಮ | 25/1 | ಖುಷ್ಕಿ | 330 | 25 ರ ಉಳಿಕೆ | 25 ರ ಉಳಿಕೆ | ದ್ವಾರನಹಳ್ಳಿ ಗಡಿ | 0–08 | 0–27 |
| 5. | ಷಬ್ಬೀರ್‌ಸಾಬ್ ಬಿನ್ ಹಯಾದ್‌ಸಾಬ್ | ಷಬ್ಬೀರ್‌ಸಾಬ್ | 25/ ಪಿ24 | ಖುಷ್ಕಿ | 330 | 25 ರ ಉಳಿಕೆ | 25 ರ ಉಳಿಕೆ | ದ್ವಾರನಹಳ್ಳಿ ಗಡಿ | 0–06 | 0–30 |
| | **ಒಟ್ಟು** | | | | | | | | **1–05** | **1–93** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ–2)

ಪಿ.ಆರ್. 154

**ಕಂದಾಯ ಸಚಿವಾಲಯ**

**ಭೂ ಸ್ವಾಧೀನ ಕಾಯ್ದೆ ಕಲಂ 6(1)ರ ಅನ್ವಯ ಘೋಷಣೆ**

**ಕ್ರಮಾಂಕ : ಕಂ.ಇ. 05 ಭೂ ಸ್ವಾ ಗ್ರಾ 2009, ದಿನಾಂಕ: 23ನೇ ಮಾರ್ಚ್ 2009**

ಈ ಮುಂದಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಜಮೀನುಗಳು ಒಂದು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ಜಮೀನನ್ನು ಬೆಂಗಳೂರು–ಮೈಸೂರು ವಿಭಾಗ ಕೆಂಗೇರಿ, ರಾಮನಗರ ಸ್ಟೇಷನ್ ನಿರ್ಮಾಣ ಮಾಡಲು ರೈಲ್ವೆ ಇಲಾಖೆ ಬೆಂಗಳೂರು ರವರ ಪರವಾಗಿ ಭೂ ಸ್ವಾಧೀನಪಡಿಸಿಕೊಳ್ಳುವುದು ಅಗತ್ಯವಾಗಿದೆಯೆಂದು ಜಿಲ್ಲಾಧಿಕಾರಿಗಳು, ರಾಮನಗರಂ ಜಿಲ್ಲೆ ರವರ ನಂ. ರಾ.ಜಿ.ಕಾ.ಎ2.ಸಂ./ಎಲ್.ಎ.ಕ್ಯೂ.ಎಸ್.ಆರ್.29/07–08 ದಿನಾಂಕ: 15.02.2008ರಂತೆ ಪ್ರಕಟವಾಗಿರುವ ಭೂ ಸ್ವಾಧೀನ ಅಧಿನಿಯಮ ಪ್ರಕರಣ 17(1) ಉಪಪ್ರಕರಣ (4)ರಲ್ಲಿ ಓದಲಾದಂತೆ 4(1)ರ ಅಧಿಸೂಚನೆಯಲ್ಲಿ ತಿಳಿಯಪಡಿಸಲಾಗಿದೆ. ಸದರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರ ಭಾಗ–6 ಪುಟ 539 ರಿಂದ 540 ರವರೆಗೆ ದಿ.03.04.2008ರಂದು ಪ್ರಕಟಿಸಲಾಗಿದೆ.

1991ನೇ ಸಾಲಿನ ಕರ್ನಾಟಕ ಅಧಿನಿಯಮದ 17ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸ್ವಾಧೀನ ಅಧಿನಿಯಮ 1894ನೇ ಸಾಲಿನ ಅಧಿನಿಯಮ 6(1ಎ) ಪ್ರಕರಣದ ಮೇರೆಗೆ ಕೆಳಗೆ ಸೂಚಿಸಿರುವ ಜಮೀನುಗಳನ್ನು ಭೂ ಸ್ವಾಧೀನಪಡಿಸಿಕೊಳ್ಳಲು ಅಗತ್ಯವಿದೆಯೆಂದು ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಜಮೀನು ಅಗತ್ಯವಾಗಿದೆಯೆಂದು ಸದರಿ ಅಧಿನಿಯಮದ 6 ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಲಾಗಿದೆ. ಭೂ ಸ್ವಾಧೀನ ಕಾಯ್ದೆಯ ಪ್ರಕರಣ 17 ಉಪ ಪ್ರಕರಣ (4)ರಲ್ಲಿ ವಿಧಿವತ್ತಾಗಿರುವ ಅಧಿಕಾರದ ಪ್ರಕಾರ ಕರ್ನಾಟಕ ಸರ್ಕಾರದಿಂದ ತುರ್ತು ಶಾಸನ ರೀತ್ಯಾ 5(ಎ) ಪ್ರಕರಣವು ಇದಕ್ಕೆ ಅನ್ವಯಿಸುವುದಿಲ್ಲ.

ಸದರಿ ಭೂ ಸಂಗ್ರಹಣಾ ಅಧಿನಿಯಮ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ವಿಶೇಷ ಭೂ ಸ್ವಾಧೀನಾಧಿಕಾರಿಗಳು, 3ನೇ ಮಹಡಿ, ವಿಶ್ವೇಶ್ವರಯ್ಯ ಕೇಂದ್ರ, ಬೆಂಗಳೂರು–1 ಇವರನ್ನು ಇನ್ನು ಮುಂದೆ ಕೈಗೊಳ್ಳುವ ಕುರಿತಂತೆ ಜಿಲ್ಲಾಧಿಕಾರಿಗಳವರ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸುವಂತೆ ಈ ಮೂಲಕ ನಿಯಮಿಸಲಾಗಿದೆ. ಮತ್ತು ಜಮೀನಿನ ಅಧಿಕೃತ ಸ್ವಾಧೀನ ಆದೇಶಗಳನ್ನು ಪಡೆಯುವಂತೆ ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶಿಸಲಾಗಿದೆ.

ಮೇಲ್ಕಂಡ ಅಧಿನಿಯಮದ 17ನೇ ಪ್ರಕರಣದ ಪ್ರಕರಣ (4)ರ ಪ್ರಕರಣದಲ್ಲಿರುವ ಅಧಿಕಾರದ ಮೇಲೆ ಸದರಿ ಅಧಿನಿಯಮದ ಪ್ರಕರಣ 9ರಲ್ಲಿನ ಪ್ರಕರಣ 10ರ ಪ್ರಕಾರ ಹೊರಡಿಸಲಾಗಿರುವ ತಿಳುವಳಿಕೆಯನ್ನು ಪ್ರಕಟಿಸಿದ ದಿನಾಂಕದಿಂದ 15 ದಿವಸಗಳು ಕಳೆದ ನಂತರ ಸದರಿ ಜಮೀನನ್ನು ಸ್ವಾಧೀನ ಪಡೆಯಲು ನಿರ್ದೇಶಿಸಿರುತ್ತದೆ.

ಸದರಿ ಜಮೀನುಗಳ ಒಂದು ನಕ್ಷೆಯನ್ನು ವಿಶೇಷ ಭೂ ಸ್ವಾಧೀನಾಧಿಕಾರಿಗಳು, ವಿಶ್ವೇಶ್ವರಯ್ಯ ಕೇಂದ್ರ, 3ನೇ ಮಹಡಿ, ಪೋಡಿಯಂ ಬ್ಲಾಕ್, ಬೆಂಗಳೂರು–1 ಇವರ ಕಾರ್ಯಾಲಯದಲ್ಲಿ ಅವಗಾಹನೆಗಾಗಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ರಾಮನಗರ **ತಾಲ್ಲೂಕು:** ರಾಮನಗರ **ಹೋಬಳಿ:** ಬಿಡದಿ **ಗ್ರಾಮಗಳು:** ಬಿಡದಿ, ಕೇತಗಾನಹಳ್ಳಿ, ಕೆಂಚನಕುಪ್ಪೆ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂಬರ್ | ತರಹೆ | ಭೂಸ್ವಾಧೀನದ ಜಮೀನಿನ ವಿಸ್ತರಣೆ | ಆಕಾರ | ಚೆಕ್ಕುಬಂದಿ (ಚತು:ಸೀಮೆ) | | | |
|---|---|---|---|---|---|---|---|---|---|---|
| | | | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. |
| | | | | | **ಗ್ರಾಮ : ಬಿಡದಿ** | | | | | |
| 1 | ಖಬರ್‌ಸ್ಥಾನ್ | | 19 | – | 0–03 | | 19ರ ಉಳಿಕೆ | ಕೇತಗಾನಹಳ್ಳಿ ಗಡಿ | ಸನಂ 20 | ಸನಂ 18 |
| 2 | ಬಿ.ಎಂ. ಬೆಟ್ಟಪ್ಪ (ಎನ್.ಎ.ಕೆ) | ಬಿ.ಎಂ. ಬೆಟ್ಟಪ್ಪ | 20 | – | 0–15 | | 20ರ ಉಳಿಕೆ ಭೂ ಪರಿವರ್ತಿತ ಉಳಿಕೆ ಜಮೀನು 1–09 | ಕೇತಗಾನಹಳ್ಳಿ ಗಡಿ | ಬಿಲ್ ಕೆಂಟನ್ ಹಳ್ಳಿ ಗಡಿ | 19 |
| | | | | **ಒಟ್ಟು** | **0–18** | | | | | |
| | | | | | **ಗ್ರಾಮ : ಕೇತಗಾನಹಳ್ಳಿ** | | | | | |
| 1 | ಕಾರ್ಯನಿರ್ವಾಹಕ ಅಧಿಕಾರಿಗಳು ತಾಲ್ಲೂಕು ಪಂಚಾಯ್ತಿ, ಎ.ಎನ್. ಪುಟ್ಟನಂಜಪ್ಪ ಬಿನ್ ಲೇಟ್ ನಂಜುಂಡಪ್ಪ ಗಿರಿಯಪ್ಪ ಬಿನ್ ಮುತ್ತಯ್ಯ ಕೆ. ಲೋಕೇಶ್ ಬಿನ್ ಬಿ. ಕೃಷ್ಣಪ್ಪ ಕೆ.ಹೆಚ್. ಚೆನ್ನಪ್ಪ ಬಿನ್ ಕಾಳಪ್ಪ ಶಾರದಮ್ಮ ಕೋಂ ಜಯರಾಮು ಸೀತಮ್ಮ ಕೋಂ ಆಂಜನಪ್ಪ | – ಜಂಟಿ ಜಂಟಿ | 20ಪಿ1 20ಪಿ2 20ಪಿ3 20ಪಿ4 20ಪಿ5 | – | 0–12 1/2 | 1–00 | ರೈಲ್ವೆ ಜಾಗ | 20ರ ಉಳಿಕೆ | 15 | ಬಿಡದಿಗಡಿ |
| 2 | ಕೆ. ನಾಗರಾಜು ಬಿನ್ ಕೃಷ್ಣಪ್ಪ | ಕೆ. ನಾಗರಾಜು | 18 | – | 0–07 | 0–30 | ಸನಂ 17 | 18ರ ಉಳಿಕೆ | ಸನಂ 67 | ಸನಂ 20 |
| 3 | ಖರಾಬಾದರವರು ಷಯಲ್ಲು ಬಿನ್ನಿದರಾಜಾ ಸೀತಮ್ಮ ಕೋಂ ಅಂಜನಪ್ಪ ಸತ್ತರ್‌ಸಾಬ್ ಬಿನ್ ಜೈನಾಸಾಬ | – ಸೀತಮ್ಮ ಸತ್ತರ್‌ಸಾಬ್ | 17ಪಿ1 17ಪಿ2 17ಪಿ3 | – | 0–22 | 1–00 | ರೈಲ್ವೆಲೇನ್ | ಸನಂ 18,67 | ಸನಂ 63 | ಸನಂ 18 |
| 4 | ಬಿ.ಆರ್. ರಾಮಸ್ವಾಮಿ ಬಿನ್ ರಾಮಯ್ಯ | ಬಿ.ಆರ್. ರಾಮಸ್ವಾಮಿ | 19 | – | 3–08 | 1–20 | ಬಿಡದಿಗಡಿ | ರೈಲ್ವೆಲೈನ್ | ಕೆಂಪಲಿಂಗನ ಹಳ್ಳಿ | ಬಿಡದಿಗಡಿ |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂಬರ್ | ತರಹೆ | ಭೂಸ್ವಾಧೀನದ ಜಮೀನಿನ ವಿಸ್ತರಣೆ | ಆಕಾರ | ಚೆಕ್ಕುಬಂದಿ (ಚತು:ಸೀಮೆ) | | | |
|---|---|---|---|---|---|---|---|---|---|---|
| | | | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. |
| 5 | ಅಬ್ದುಲ್ ಸತ್ತಾರ್ ಬಿನ್ ಜಿನ್ನಾಸಾಹೇಬ್ | | 63 | – | 0–25 | 1–00 | ರೈಲ್ವೇಲೇನ್ | 63ರ ಉಳಿಕೆ | ಸನಂ 16 | ಸನಂ 63 |
| | | | | **ಒಟ್ಟು** | **4–34 1/2** | | | | | |
| **ಗ್ರಾಮ : ಕೆಂಚನಕುಪ್ಪೆ** | | | | | | | | | | |
| 1 | ಖಂಡಸಾರಿ ಸಕ್ಕರೆ ಕಾರ್ಖಾನೆ ರಾಮನಾರಾಯಣ ಕೇಡಿಯಾ ಬಿನ್ ಮನ್ನಾಲಾಲ್ ಸಿದ್ದಯ್ಯ ಬಿನ್ ನಂಜೇಗೌಡ | ರಾಮನಾರಾಯಣ ಕೇಡಿಯಾ ಸಿದ್ದಯ್ಯ | 178:2 ರ ಉಳಿಕೆ | – | 0–08 1/4 | 1–00 | 178:2ರ ಉಳಿಕೆ | ರೈಲ್ವೇಲೇನ್ | 178:2ರ ಉಳಿಕೆ | 178:1 |
| 2 | ಬಿ.ಕೆ. ಭಾಸ್ಕರ್ ಎನ್.ಎ.ಕೆ ಬಿನ್ ಎಂ. ಕಲ್ಲಪ್ಪ | ಎನ್.ಎ.ಕೆ | 120:1 | – | 0–13 | – | ರೈಲ್ವೇಲೇನ್ | ರಸ್ತೆ | 120:1ರ ಉಳಿಕೆ | 120:2ಎ |
| | | | | **ಒಟ್ಟು** | **0–21 1/4** | | | | | |

| **ಘೋಷ್ವಾರೆ** | | |
|---|---|---|
| | | ಎಕರೆ:ಗುಂಟೆ |
| 1) | ಬಿಡದಿ | 0–18 |
| 2) | ಕೇತಗಾನಹಳ್ಳಿ | 4–34 1/2 |
| 3) | ಕೆಂಚನಕುಪ್ಪೆ | 0–21 1/4 |
| | **ಒಟ್ಟು ವಿಸ್ತೀರ್ಣ** | **5–33 3/4** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ–2)

ಪಿ.ಆರ್. 160

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಭೂ ಅರ್ಜನೆ ಅಧಿನಿಯಮದ 4(1) ನೇ ಪ್ರಕರಣದ ಮೇರೆಗಿನ ಅಧಿಸೂಚನೆ**

**ಕ್ರಮಾಂಕ:ಆರ್(3) ಎಲ್.ಎಕ್ಯೂ[ಸಿಆರ್.40/2005–06] ಎಸ್.ಆರ್. 6/08–09, ದಿನಾಂಕ: 29ನೇ ಮಾರ್ಚ್ 2009**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಎಂದರೆ ಸಾಗರ ಪಟ್ಟಣಕ್ಕೆ ಕುಡಿಯುವ ನೀರು ಸರಬರಾಜಿಗೆ ಸುಧಾರಿತ ನೀರು ಸರಬರಾಜು ಯೋಜನೆಗೆ ಅಗತ್ಯವಾಗಿದೆಯೆಂದು ಕರ್ನಾಟಕ ಸರ್ಕಾರಕ್ಕೆ ಕಂಡುಬಂದಿರುವುದರಿಂದ :

ಕರ್ನಾಟಕ ಅಧಿನಿಯಮ 1991ರ 33ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894 (ಕೇಂದ್ರ ಅಧಿನಿಯಮ ಸಂಖ್ಯೆ: 1894) ರ (1) 4ನೇ ಪ್ರಕರಣದ (1)ನೇ ಉಪ ಪ್ರಕರಣದ ಉಪಬಂಧಗಳ ಅನುಸಾರವಾಗಿ, ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಆ ಬಗ್ಗೆ ಈ ಮೂಲಕ ನೋಟೀಸನ್ನು ಕೊಡಲಾಗಿದೆ ಹಾಗೂ ಕರ್ನಾಟಕ ಸರ್ಕಾರವು ಆ ಅಧಿನಿಯಮದ 4(2)ನೇ

ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಭೂ ಸ್ವಾಧೀನಾಧಿಕಾರಿ ಹಾಗೂ ಸಾಗರ ಉಪವಿಭಾಗಾಧಿಕಾರಿಗಳಿಗೆ ಮತ್ತು ಅವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಿರುತ್ತದೆ.

ಸದರಿ ಅಧಿನಿಯಮ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5–ಎ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ಭೂ ಸ್ವಾಧೀನಾಧಿಕಾರಿ ಹಾಗೂ ಉಪವಿಭಾಗಾಧಿಕಾರಿಗಳು, ಸಾಗರ ಇವರನ್ನು ನೇಮಕ ಮಾಡಿದೆ.

ಈ ಭೂಮಿ ಹಾಗೂ ಕಟ್ಟಡಗಳಲ್ಲಿ ಹಿತಾಸಕ್ತಿ ಹೊಂದಿರುವ ಯಾವನೇ ವ್ಯಕ್ತಿಯು ತಮ್ಮ ಆಕ್ಷೇಪಣೆಗಳು ಯಾವುದಾದರೂ ಇದ್ದಲ್ಲಿ ಅವುಗಳನ್ನು ಈ ಪ್ರಕಟಣೆ ಪ್ರಕಟವಾದ 30 ಮೂವತ್ತು ದಿವಸಗಳೊಳಗಾಗಿ ಕರ್ನಾಟಕ ಅಧಿನಿಯಮ 1991ರ 33ರ ಮೂಲಕ ತಿದ್ದುಪಡಿಯಾದ ಭೂ ಆರ್ಜನೆ ಅಧಿನಿಯಮ 1894 ರ 3(ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ಭೂ ಸ್ವಾಧೀನಾಧಿಕಾರಿ ಹಾಗೂ ಉಪವಿಭಾಗಾಧಿಕಾರಿ, ಸಾಗರ ಇವರಿಗೆ ಲಿಖಿತದಲ್ಲಿ ಸಲ್ಲಿಸಬಹುದು.

ಸದರಿ ಭೂ ಆರ್ಜನೆ ಉದ್ದೇಶಕ್ಕಾಗಿ ಸದರಿ ಭೂಮಿ ಹಾಗೂ ಕಟ್ಟಡಗಳ ಮೇಲೆ ನಿಯೋಜಿತರಾದ ಯಾವನೇ ಮೋಜಣಿದಾರ ಅಥವಾ ಇತರೆ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಸದರಿ ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ಶಿವಮೊಗ್ಗ ಜಿಲ್ಲಾಧಿಕಾರಿಯವರ ಅನುಮತಿ ಇಲ್ಲದೆ ಮಾರಾಟ, ಗುತ್ತಿಗೆ, ಅಡಮಾನ, ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ ವಿಲೇಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚಗಳನ್ನು ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಆರ್ಜನೆ ಮಾಡಿಕೊಳ್ಳಲಾಗುವ ಸದರಿ ಭೂಮಿಗಳ / ಕಟ್ಟಡಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯು ಸದರಿ ಅಧಿನಿಯಮದ 24ನೇ ಪ್ರಕರಣದ ಏಳನೇ ಖಂಡದ (ಉಪಪ್ರಕರಣದ) ಮೇರೆಗೆ ಗಣನೆಗೆ ತೆಗೆದುಕೊಳ್ಳಬಾರದು.

ಭೂ ಸ್ವಾಧೀನಾಧಿಕಾರಿ ಹಾಗೂ ಉಪವಿಭಾಗಾಧಿಕಾರಿ, ಸಾಗರ ರವರ ಕಛೇರಿಯಲ್ಲಿ ಸದರಿ ಭೂಮಿ/ ಕಟ್ಟಡಗಳ ಸ್ಥೂಲ ನಕಾಶೆಯನ್ನು ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ : ಶಿವಮೊಗ್ಗ ತಾಲ್ಲೂಕು : ಸಾಗರ ಹೋಬಳಿ : ಕಸಬಾ ಗ್ರಾಮ : ಯಲಗಳಲೆ, ಬಾಳಗೋಡು, ಮರಸ, ಜಂಬಗಾರು**

| ಕ್ರ. ಸಂ. | ವಿವರಣೆಗ ಳೊಂದಿಗೆ ಕ್ರ.ಸಂ. | ಖಾತೇದಾರರ / ಅನುಭವದಾರ ಅಥವಾ ಗೇಣಿದಾರರ ಅಥವಾ ಹಿತಾಸಕ್ತಿ ಹೊಂದಿರುವ ಇತರೆ ವ್ಯಕ್ತಿಯ ಹೆಸರು | ತರಹೆ | ಸರ್ವೆ ನಂ. | ಚಕ್ಕುಬಂದಿ | | | | ಅಗತ್ಯವಾದ ಅಂದಾಜು ವಿಸ್ತೀರ್ಣ ಎ. ಗುಂ. | ಆಕಾರ ರೂ. ಪೈ. |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | | |
| | | | | **1. ಯಲಗಳಲೆ** | | | | | | |
| 1. | | ಕೆ.ನಾರಾಯಣಪ್ಪ ಬಿನ್ ವೀರಪ್ಪ | ಖುಷ್ಕಿ | 120/1 | 120/2 | 93 | ನದಿ | 120/2 | 1.20 | 0.36 |
| | | | | **2. ಬಾಳಗೋಡು** | | | | | | |
| 2 | | ನಾರಾಯಣಪ್ಪ ಬಿನ್ ಗಾಮಪ್ಪ | ತರಿ | 38 | 38/1 | 47 | 38/1 | 40 | 0.08 | 1.13 |
| 3 | | ಕೆರಿಯಮ್ಮ ಕೋಂ ನಾರಾಯಣಪ್ಪ | ತರಿ | 48 | 38 | 48 | 38 | 48 | 0.08 | 1.00 |
| 4 | | ದಶರಥ ಬಿನ್ ಮಹಾದೇವಪ್ಪ | ತರಿ | 48 | 38/1 | 48 | 38 | 39 | 0.10 | 1.25 |
| | | | **ಒಟ್ಟು** | | | | | | **0.26** | |
| | | | | **3. ಮರಸ** | | | | | | |
| 5 | | ಯಂಕಿ ಶಿವಪ್ಪ ಬಿನ್ ರಾಮಪ್ಪ | ತರಿ | 20/ಪಿ1 | 32 | 20 | 32 | 32 | 0.22 | 2.37 |

| ಕ್ರ. ಸಂ. | ವಿವರಣೆಗೆ ಟೊಂದಿಗೆ ಕ್ರ.ಸಂ. | ಖಾತೇದಾರರ / ಅನುಭವದಾರ ಅಥವಾ ಗೇಣಿದಾರರ ಅಥವಾ ಹಿತಾಸಕ್ತಿ ಹೊಂದಿರುವ ಇತರೆ ವ್ಯಕ್ತಿಯ ಹೆಸರು | ತರಹೆ | ಸರ್ವೆ ನಂ. | ಚಕ್ಕುಬಂದಿ | | | | ಅಗತ್ಯವಾದ ಅಂದಾಜು ವಿಸ್ತೀರ್ಣ ಎ. ಗುಂ. | ಆಕಾರ ರೂ. ಪೈ. |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | | |
| 6 | | ಕೆರಿಯಮ್ಮ ಕೋಂ ನಾರಾಯಣಪ್ಪ | ತರಿ | 20/ಪಿ2 | 32 | 20 | 32 | 32 | 0.05 | 0.53 |
| 7 | | ದಶರಥ ಬಿನ್ ಮಹಾದೇವಪ್ಪ | ತರಿ | 20/ಪಿ2 | 32 | 20 | 20 | 20 | 0.05 | 0.53 |
| 8 | | ಮಂಜಪ್ಪ ಬಿನ್ ಮೈಲಪ್ಪ | ತರಿ | 20/ಪಿ5 | 32 | 20 | 20 | 20 | 0.30 | 3.23 |
| 9 | | ಗುರುಮೂರ್ತಿ ಬಿನ್ ಕನ್ನಪ್ಪ | ತರಿ | 20/ಪಿ6 | 32 | 32 | 20 | 20 | 0.23 | 2.47 |
| 10 | | ದೊಡ್ಮನೆ ರಾಮಪ್ಪ ಬಿನ್ ಕನ್ನಪ್ಪ | ತರಿ | 20/ಪಿ7 | 32 | 20 | 31 | 20 | 0.02 | 0.21 |
| 11 | | ಹೆಗ್ಗದ್ದೆ ಕನ್ನಮ್ಮ ಕೋಂ ಹುಚ್ಚಪ್ಪ | ತರಿ | 30/ಪಿ1 | 20 | 20 | 21 | 20 | 0.30 | 3.77 |
| 12 | | ಕನ್ನಮ್ಮ ಕೋಂ ಹೆಗ್ಗದ್ದೆ ಗಿಡ್ಡಪ್ಪ | ತರಿ | 30/ಪಿ2 | 20 | 30 | 20 | 20 | 0.09 | 1.13 |
| 13 | | ಹೆಗ್ಗದ್ದೆ ಕನ್ನಪ್ಪ ಬಿನ್ ಬಸಪ್ಪ | ತರಿ | 30/ಪಿ3 | 20 | 30 | 20 | 20 | 0.12 | 1.50 |
| 14 | | ಕೆರಿಯಮ್ಮ ಕೋಂ ನಾರಾಯಣಪ್ಪ | ತರಿ | 30/ಪಿ3 | 20 | 32 | 20 | 20 | 0.12 | 1.50 |
| 15 | | ಕೆಂಚಮ್ಮ ಕೊಂ ಮಂಜಪ್ಪ | ತರಿ | 30/ಪಿ5 | 20 | 30 | 20 | 31 | 0.10 | 3.23 |
| 16 | | ಮಳ್ಳಿ ದೇಸಮ್ಮ ಕೋಂ ಮಂಜಪ್ಪ | ಖುಷ್ಕಿ | 101 | 101 | 101 | 101 | 101 | 0.28 | 0.21 |
| | | | **ಒಟ್ಟು** | | | | | | **4.28** | |
| | | **4. ಜಂಬಗಾರು** | | | | | | | | |
| 17 | | ಕೆರಿಯಮ್ಮ ಕೋಂ ರಾಮಪ್ಪ | ತರಿ | 21/1ಪಿ | 21/1 | 21/2 | ಹಳ್ಳ | 21/1 | 0.20 | 2.13 |

**ಘೋಷ್ವಾರೆ**

| ಕ್ರ. ಸಂ. | ಗ್ರಾಮ | ತರಿ | ಖುಷ್ಕಿ | ಒಟ್ಟು ವಿಸ್ತೀರ್ಣ (ಎ. ಗುಂ.) |
|---|---|---|---|---|
| 01 | ಯಲಗಳಲೆ | – | 1.20 | 1.20 |
| 02 | ಬಾಳಗೋಡು | 0.26 | – | 0.26 |
| 03 | ಮರಸ | 4.00 | 0.28 | 4.28 |
| 04 | ಜಂಬಗಾರು | 0.20 | – | 0.20 |
| | **ಜುಮ್ಲಾ** | **5.06** | **2.08** | **7.14** |

ಜಿಲ್ಲಾಧಿಕಾರಿಗಳು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 163